ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಪ್ಲಾಸ್ಟಿಕ್ ಸಾಮಗ್ರಿಗಳ ನಿಷೇಧ ಕುರಿತು ಯೋಜನೆ ಬಗ್ಗೆ

ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) :-

953(1012) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಕರ್ನಾಟಕದ ಕೆಲವು ಮಾದರಿಯ ಪ್ಲಾಸ್ಟಿಕ್ ಸಾಮಗ್ರಿಗಳ ಉತ್ಪಾದನೆ ಮತ್ತು ಮಾರಾಟವನ್ನು ನಿಷೇಧಿಸಲಾಗಿದೆಯೇ; ಈ ಹಿನ್ನೆಲೆಯಲ್ಲಿ ಪ್ಲಾಸ್ಟಿಕ್ ಹೊರತುಪಡಿಸಿ ಜೈವಿಕವಾಗಿ ಕರಗುವ ಮತ್ತು ಬಳಸಿ ಪ್ಯಾಕಿಂಗ್ ಮಾಡುವ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಿ ತರಬೇತಿ ನೀಡಲು ಪರ್ಯಾಯ ಪ್ಯಾಕಿಂಗ್ ತಂತ್ರಜ್ಞಾನ ಅಭಿವೃದ್ಧಿ ಸಂಸ್ಥೆ ತೆರೆಯಲು ರೂ.5.00 ಕೋಟಿಗಳನ್ನು ಒದಗಿಸಿದ್ದು, ಇದು ಅನುಷ್ಠಾನದಲ್ಲಿದೆಯೇ; ಅನುಷ್ಠಾನಗೊಳಿಸದೆ ಇದ್ದಲ್ಲಿ, ಕಾರಣಗಳೇನು;

(ಆ) ಅನುಷ್ಠಾನಗೊಂಡಿದ್ದಲ್ಲಿ ಯಾವ ಸಂಸ್ಥೆಯಿಂದ ಈ ತರಬೇತಿ ಕಾರ್ಯ ನಡೆಯುತ್ತಿದೆ;

(ಇ) ನಿಯಮಾನುಸಾರ ಟೆಂಡರ್ ಪ್ರಕ್ರಿಯೆ ನಡೆಯುತ್ತಿದೆಯೇ? (ಈ ಬಗ್ಗೆ ಸಂಪೂರ್ಣ ವರದಿ ನೀಡುವುದು)